ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 830
ಸದಸ್ಯರ ಹೆಸರು : ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 28-09-2020
ಉತ್ತರಿಸುವ ಸಚಿವರು : ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಾಸನ ಜಿಲ್ಲೆಯ ಆಲೂರು ಮತ್ತು ಸಕಲೇಶಪುರ ವಲಯಗಳಲ್ಲಿ ಕೆಲವು ಖಾಸಗಿ ರೆಸಾರ್ಟ್‌ನವರು ಕಾಯ್ದಿರಿಸಿದ ಅರಣ್ಯದೊಳಗೆ ರಸ್ತೆಗಳನ್ನು ನಿರ್ಮಾಣ ಮಾಡಿರುವ ಮತ್ತು ಈ ಭಾಗದಲ್ಲಿ ಪ್ರಾಣಿ ಭೇಟಿಗಾಗಿ ಪ್ರೋತ್ಸಾಹ ನೀಡುತ್ತಿರುವ ಬಗ್ಗೆ ದೂರುಗಳು ಬಂದಿವೆಯೇ; ಬಂದಿದ್ದಲ್ಲಿ, ಈ ಸಂಬಂಧ ಏನು ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಹಾಸನ ಜಿಲ್ಲೆ, ಆಲೂರು ಮತ್ತು ಸಕಲೇಶಪುರ ವಲಯಗಳಲ್ಲಿ ಕಾಯ್ದಿರಿಸಿದ ಅರಣ್ಯದೊಳಗೆ ಯಾವುದೇ ರಸ್ತೆಗಳನ್ನು ಖಾಸಗಿ ರೆಸಾರ್ಟ್‌ನವರು ನಿರ್ಮಾಣ ಮಾಡಿರುವುದಿಲ್ಲ ಹಾಗೂ ಪ್ರಾಣಿ ಭೇಟಿಗಾಗಿ ಪ್ರೋತ್ಸಾಹ ನೀಡುತ್ತಿರುವ ಬಗ್ಗೆ ಯಾವುದೇ ದೂರುಗಳು ಸ್ವೀಕೃತವಾಗಿರುವುದಿಲ್ಲ. |
| ಆ) | ಯಶಲೂರು, ಆಲೂರು ಮತ್ತು ಸಕಲೇಶಪುರ ವಲಯಗಳಲ್ಲಿ ವನ್ಯ ಮೃಗಗಳ ಕಳ್ಳಬೇಟೆ ಮತ್ತು ಅರಣ್ಯ ಸಂಪತ್ತು ಲೂಟಿ ಮಾಡುತ್ತಿರುವವರ ವಿರುದ್ಧ ಕಳೆದ 3 ವರ್ಷಗಳಲ್ಲಿ ದಾಖಲಾಗಿರುವ ಪ್ರಕರಣಗಳೆಷ್ಟು; (ವಿವರ ನೀಡುವುದು) | ಯಶಲೂರು, ಆಲೂರು ಮತ್ತು ಸಕಲೇಶಪುರ ವಲಯಗಳಲ್ಲಿ ವನ್ಯ ಮೃಗಗಳ ಕಳ್ಳಬೇಟೆ ಮತ್ತು ಅರಣ್ಯ ಸಂಪತ್ತು ಲೂಟಿ ಮಾಡುತ್ತಿರುವವರ ವಿರುದ್ಧ ಕಳೆದ 3 ವರ್ಷಗಳಲ್ಲಿ ದಾಖಲಾಗಿರುವ ಪ್ರಕರಣಗಳು ಈ ಕೆಳಕಂಡಂತಿವೆ:- |

| ಕ್ರ.ಸಂ | ವರ್ಷ | ವನ್ಯಪ್ರಾಣಿ ಕಳ್ಳಬೇಟೆ ಪ್ರಕರಣ | ಅರಣ್ಯ ಸಂಪತ್ತು ಅಪರಾಧ ಪ್ರಕರಣ |
|---|---|---|---|
| ಯಸಳೂರು | | | |
| 01 | 2017-18 | 01 | 02 |
| 02 | 2018-19 | 01 | 13 |
| 03 | 2019-20 | 01 | 01 |
| ಆಲೂರು | | | |
| 01 | 2017-18 | - | 09 |
| 02 | 2018-19 | - | 03 |
| 03 | 2019-20 | - | 03 |
| ಸಕಲೇಶಪುರ | | | |
| 01 | 2017-18 | 01 | 09 |
| 02 | 2018-19 | 06 | 03 |
| 03 | 2019-20 | 02 | 07 |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಇ) | ವನ್ಯ ಮೃಗಗಳ ಕಳ್ಳಬೇಟೆ ಮತ್ತು ಅರಣ್ಯ ಸಂಪತ್ತು ಕಳ್ಳತನ ತಡೆಗಟ್ಟಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ವನ್ಯಮೃಗಗಳ ಕಳ್ಳಬೇಟೆ ಮತ್ತು ಅರಣ್ಯ ಸಂಪತ್ತು ಕಳ್ಳತನ ತಡೆಗಟ್ಟಲು ಇಲಾಖೆಯು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

| | | |
|---|---|---|
| | | 1. ಅರಣ್ಯ ಇಲಾಖೆಯ ಪ್ರಾದೇಶಿಕ ಮತ್ತು ವನ್ಯಜೀವಿ ಘಟಕದ ಸಿಬ್ಬಂದಿಗಳು ರಕ್ಷಿತಾರಣ್ಯ ಹಾಗೂ ಅಭಯಾರಣ್ಯಗಳ ಸುತ್ತಲೂ ಗಸ್ತು ತಿರುಗುತ್ತಾ, ಅತೀ ಸೂಕ್ಷ್ಮ ಪ್ರದೇಶಗಳಲ್ಲಿ ಹಗಲು ರಾತ್ರಿ ಜಾಗೃತರಾಗಿ ಕಳ್ಳಬೇಟೆಗಾರರ ಬಗ್ಗೆ ನಿಗಾ ವಹಿಸಿರುತ್ತಾರೆ.<br>2. ಕಳ್ಳಬೇಟೆ ನಿಯಂತ್ರಣಾ ಶಿಬಿರಗಳನ್ನು ನಿರ್ಮಿಸಿದ್ದು ಒಂದು ಶಿಬಿರದಲ್ಲಿ 3 ರಿಂದ 5 ಸದಸ್ಯರಿರುವ ತಂಡಗಳನ್ನು ರಚಿಸಲಾಗಿದ್ದು ಅವರುಗಳು ರಕ್ಷಿತಾರಣ್ಯದ ಸೂಕ್ಷ್ಮ ಪ್ರದೇಶಗಳಲ್ಲಿ ನಿಗಾ ವಹಿಸುತ್ತಿರುತ್ತಾರೆ.<br>3. ರಕ್ಷಿತ ಅರಣ್ಯ ಪ್ರದೇಶಗಳಲ್ಲಿ ಮತ್ತು ಅಭಯಾರಣ್ಯಗಳ ಗಡಿಭಾಗದಲ್ಲಿರುವ ಸಿಬ್ಬಂದಿಗೆ ವಾಹನ ಮತ್ತು ಮೋಟರೈಸ್ಡ್ ಬೋಟುಗಳ ಸೌಕರ್ಯ ಕಲ್ಪಿಸಲಾಗಿದೆ.<br>4. ವನ್ಯಜೀವಿ ಘಟಕಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ವಲಯ ಅರಣ್ಯಾಧಿಕಾರಿಗಳಿಗೆ ಶಸ್ತ್ರಾಸ್ತ್ರಗಳನ್ನು ಒದಗಿಸಲಾಗಿದೆ. (ಅವುಗಳಲ್ಲಿ ಪ್ರಮುಖವಾಗಿ ಡಿ.ಬಿ.ಬಿಎಲ್. ಗನ್, ರೈಫಲ್, ರಿವಾಲ್ವರ್ ಮತ್ತು ಪಿಸ್ತೂಲುಗಳು)<br>5. ತುರ್ತಾಗಿ ಸುದ್ದಿ ಮುಟ್ಟಿಸುವ ಸಂಬಂಧವಾಗಿ ವೈರ್‌ಲೆಸ್ ಸೆಟ್ ಮತ್ತು ವಾಕಿ ಟಾಕಿಗಳನ್ನು ಒದಗಿಸಲಾಗಿರುತ್ತದೆ.<br>6. ರಕ್ಷಿತ ಅರಣ್ಯ ಪ್ರದೇಶಗಳಲ್ಲಿ ಚೆಕ್‌ಪೋಸ್ಟ್, ಚೆಕ್ಕಿಂಗ್ ಗೇಟ್ ಮತ್ತು ವಾಚ್ ಟವರ್ ನಿರ್ಮಿಸಿ ವಾಹನಗಳನ್ನು ತಪಾಸಣೆ ಮಾಡಲಾಗುತ್ತಿದೆ.<br>7. ಅರಣ್ಯ ಇಲಾಖೆಯ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ಸಹಕಾರ ನೀಡಲು ಪೊಲೀಸ್ ಸಿಬ್ಬಂದಿಯನ್ನೊಳಗೊಂಡ, ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ನೇತೃತ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ ಫಾರೆಸ್ಟ್ ಸೆಲ್ ಎಂಬ ಪ್ರತ್ಯೇಕ ಘಟಕ ಕಾರ್ಯನಿರ್ವಹಿಸುತ್ತಿದೆ. |

**ಸಂಖ್ಯೆ: ಅಪಜೀ 70 ಎಫ್‌ಎಲ್‌ಎಲ್ 2020 (ಇ)**

(ಆನಂದ್ ಸಿಂಗ್)

**ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು**